# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 188 |
| ವಿಧಾನ ಪರಿಷತ್ತು ಸದಸ್ಯರ ಹೆಸರು | : | ಶ್ರೀ ಪ್ರಕಾಶ್ ಕೆ. ರಾಥೋಡ್, (ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | : | 22.09.2020. |
| ಉತ್ತರಿಸುವ ಸಚಿವರು | : | ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ, ಇಲಾಖಾ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯ ಸರ್ಕಾರದಿಂದ ಅನ್ನಭಾಗ್ಯ ಯೋಜನೆ ಜಾರಿಗೊಳಿಸಿದ ಬಳಿಕ ಆಹಾರ ಭದ್ರತಾ ಕಾಯ್ದೆ ಅನುಷ್ಠಾನವಾಗಿರುವುದರಿಂದ ಕಳೆದ 3 ವರ್ಷಗಳಿಂದ ಕೇಂದ್ರ ಸರ್ಕಾರದಿಂದ ರಾಜ್ಯ ಸರ್ಕಾರಕ್ಕೆ ಬಂದಿರುವ ಅನುದಾನ ಎಷ್ಟು; | ಅನ್ನಭಾಗ್ಯ ಯೋಜನೆಗೆ ಸಂಬಂಧಿಸಿದಂತೆ, ಆಹಾರ ಭದ್ರತಾ ಕಾಯ್ದೆಯಡಿ ರಾಜ್ಯದಲ್ಲಿ ಅಂತ್ಯೋದಯ ಪಡಿತರ ಚೀಟಿಗಳಿಗೆ 35 ಕೆ.ಜಿ ಅಕ್ಕಿಯನ್ನು ಹಾಗೂ ಆದ್ಯತಾ ಪಡಿತರ ಚೀಟಿಗಳ ಪ್ರತಿ ಸದಸ್ಯರಿಗೆ 5 ಕೆ ಜಿ ಅಕ್ಕಿಯನ್ನು ವಿತರಿಸಲಾಗುತ್ತಿದೆ. ಈ ಅಕ್ಕಿಯನ್ನು ಕೇಂದ್ರ ಸರ್ಕಾರವು N.F.S.A ಯೋಜನೆಯಡಿ ಪ್ರತಿ ಕೆ.ಜಿ.ಗೆ ರೂ.3/-ರ ದರದಲ್ಲಿ ರಾಜ್ಯಕ್ಕೆ ಹಂಚಿಕೆ ಮಾಡುತ್ತಿದೆ. ಕೇಂದ್ರ ಸರ್ಕಾರದಿಂದ ರಾಜ್ಯಕ್ಕೆ ಪ್ರತಿ ಮಾಹೆ 2,17,403ಮೆ.ಟನ್ ಅಕ್ಕಿಯನ್ನು ರೂ.3/-ರ ದರದಲ್ಲಿ ಹಂಚಿಕೆ ಮಾಡಲಾಗುತ್ತಿದೆ.<br>ಪ್ರತಿ ಕ್ವಿಂಟಾಲ್ ಅಕ್ಕಿಗೆ ರೂ.65/- ಸಾಗಾಣಿಕೆ ವೆಚ್ಚ ಹಾಗೂ ರೂ.87/- ಚಿಲ್ಲರೆ ಲಾಭಾಂಶವನ್ನು ನೀಡಲಾಗುತ್ತಿದ್ದು, ಈ ವೆಚ್ಚದಲ್ಲಿ ಶೇಕಡ 50%ರಷ್ಟು ವೆಚ್ಚವನ್ನು ಕೇಂದ್ರ ಸರ್ಕಾರವು ಒದಗಿಸುತ್ತಿದೆ. |
| ಆ) | ಇದರಲ್ಲಿ ರಾಜ್ಯ ಮತ್ತು ಕೇಂದ್ರ ಸರ್ಕಾರದ ಪಾಲು ಎಷ್ಟು; (ವಿವರ ನೀಡುವುದು) | ಈ ಯೋಜನೆಯಲ್ಲಿ ಕೇಂದ್ರ ಸರ್ಕಾರದಿಂದ ಪ್ರತಿ ಮಾಹೆಗೆ 217403 ಮೆ.ಟನ್ ಅಕ್ಕಿಯನ್ನು ಪ್ರತಿ ಕೆ.ಜಿ ಗೆ ರೂ 3/-ರ ದರದಲ್ಲಿ ರಾಜ್ಯಕ್ಕೆ ಹಂಚಿಕೆ ನೀಡಲಾಗುತ್ತಿದೆ. ಈ ದರದಲ್ಲಿ ಖರೀದಿಸಿದ ಅಕ್ಕಿಯನ್ನು ರಾಜ್ಯದಲ್ಲಿ ಉಚಿತವಾಗಿ ವಿತರಿಸಲಾಗುತ್ತಿದೆ. ಇದರೊಂದಿಗೆ ಮೇಲೆ ವಿವರಿಸಿದ ಕೇಂದ್ರ ಸರ್ಕಾರದ ಸಾಗಾಣಿಕೆ ಮತ್ತು ಚಿಲ್ಲರೆ ಲಾಭಾಂಶದಲ್ಲಿನ ಶೇಕಡ 50% ಅನುದಾನವನ್ನು ಹೊರತುಪಡಿಸಿ ಉಳಿದ ಸಂಪೂರ್ಣ ವೆಚ್ಚವನ್ನು ರಾಜ್ಯ ಸರ್ಕಾರದಿಂದ ಭರಿಸಲಾಗುತ್ತಿದೆ.<br>ಇದಲ್ಲದೇ, ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆಯಡಿ ನಿಗಧಿಪಡಿಸಿರುವ ಪಡಿತರ ಚೀಟಿಗಳಿಗಿಂತ ಹೆಚ್ಚುವರಿಯಾಗಿ ರಾಜ್ಯದಲ್ಲಿ ವಿತರಿಸಲಾಗಿರುವ ಪಡಿತರ ಚೀಟಿ ಫಲಾನುಭವಿಗಳಿಗೆ ಅಗತ್ಯವಿರುವ ಅಕ್ಕಿಯನ್ನು ಭಾರತ ಆಹಾರ ನಿಗಮದಿಂದ ಓಎಂಎಸ್ ಯೋಜನೆಯಡಿ ಪ್ರತಿ ಕೆ.ಜಿ. ಗೆ ರೂ 22.50/-ರಂತೆ ಮತ್ತು ಮಾರುಕಟ್ಟೆ ಶುಲ್ಕ ಶೇ 1.5% ಸೇರಿದಂತೆ ರೂ 22.84/- ದರದಲ್ಲಿ ರಾಜ್ಯ ಸರ್ಕಾರದಿಂದ ಖರೀದಿಸಿ ಫಲಾನುಭವಿಗಳಿಗೆ ಹಂಚಿಕೆ ಮಾಡಲಾಗುತ್ತಿದೆ. |



| | | |
|---|---|---|
| ಇ) | ಅನ್ನಭಾಗ್ಯ ಯೋಜನೆಗೆ ಅಕ್ಕಿಯನ್ನು ಯಾವ ರಾಜ್ಯದಿಂದ ತರಿಸಲಾಗುತ್ತದೆ; ಈ ಅಕ್ಕಿಗೆ ಎಷ್ಟು ದರ ನಿಗದಿಗೊಳಿಸಲಾಗಿದೆ? (ವರ್ಷವಾರು ವಿವರ ನೀಡುವುದು) | ಕೇಂದ್ರ ಸರ್ಕಾರದ ಅನ್ನಭಾಗ್ಯ ಯೋಜನೆಗೆ ಅಗತ್ಯವಿರುವ ಅಕ್ಕಿಯನ್ನು ಭಾರತ ಆಹಾರ ನಿಗಮದಿಂದ ಖರೀದಿಸಲಾಗುತ್ತಿದೆ. ರಾಜ್ಯದಲ್ಲಿ ರಾಷ್ಟ್ರೀಯ ಆಹಾರ ಭದ್ರತಾ ಕಾಯಿದೆ ಜಾರಿಯಲ್ಲಿರುವುದರಿಂದ ಸದರಿ ಕಾಯಿದೆಯಡಿ ಕೇಂದ್ರ ಸರ್ಕಾರದಿಂದ ರಾಜ್ಯಕ್ಕೆ ಪ್ರತಿ ಮಾಹೆ 217403 ಮೆ.ಟನ್ ಅಕ್ಕಿಯನ್ನು ಪ್ರತಿ ಕೆ.ಜಿ ಗೆ ರೂ 3/-ರ ದರದಲ್ಲಿ ಹಂಚಿಕೆ ಮಾಡಲಾಗುತ್ತಿದೆ.<br><br>ಕೇಂದ್ರ ಸರ್ಕಾರದ ಆಹಾರ ಭದ್ರತಾ ಕಾಯ್ದೆ ನಿಗಧಿಪಡಿಸಿರುವ ಪಡತರ-ಚೀಟಿಗಳಿಗಿಂತ ರಾಜ್ಯದಲ್ಲಿ ಹೆಚ್ಚುವರಿಯಾಗಿ ವಿತರಿಸಲಾಗಿರುವ ಪಡಿತರ ಚೀಟಿಗಳ ಫಲಾನುಭವಿಗಳಿಗೆ ಅಗತ್ಯವಿರುವ ಅಕ್ಕಿಯನ್ನು ಪ್ರಸ್ತುತ ಓಎಂಎಸ್ ಯೋಜನೆಯಡಿ ಪ್ರತಿ ಕೆ.ಜಿ. ಗೆ ರೂ 22.50/-ರಂತೆ ಮತ್ತು ಮಾರುಕಟ್ಟೆ ಶುಲ್ಕ ಶೇ 1.5% ಸೇರಿದಂತೆ ರೂ 22.84/- ದರದಲ್ಲಿ ಭಾರತ ಆಹಾರ ನಿಗಮದಿಂದ ಖರೀದಿಸಿ ಉಚಿತವಾಗಿ ಹಂಚಿಕೆ ಮಾಡಲಾಗುತ್ತಿದೆ. ಇದಕ್ಕೆ ತಗಲುವ ಸಂಪೂರ್ಣ ವೆಚ್ಚವನ್ನು ರಾಜ್ಯ ಸರ್ಕಾರದಿಂದ ಭರಿಸಲಾಗುತ್ತಿದೆ. |

ಸಂಖ್ಯೆ: ಆನಾಸ 85 ಎಫ್.ಪಿ.ಪಿ 2020 (ಇ-ಆಫೀಸ್)

(ಕೆ. ಗೋಪಾಲಯ್ಯ)
ಆಹಾರ, ನಾಗರಿಕ ಸರಬರಾಜು
ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.